# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 232 (247)**

**ಸದಸ್ಯರ ಹೆಸರು : ಶ್ರೀ. ಆರ್. ಬಿ. ತಿಮ್ಮಾಪುರ (ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು)**

**ಉತ್ತರಿಸಬೇಕಾದ ದಿನಾಂಕ : 22.09.2020**

**ಉತ್ತರಿಸುವವರು : ಗಣಿ ಮತ್ತು ಭೂವಿಜ್ಞಾನ ಸಚಿವರು**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಗಣಿ ಉದ್ಯಮಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅವರುಗಳು ಕೆಲಸವನ್ನು ನಿರ್ವಹಿಸುವ ಸ್ಥಳಗಳಲ್ಲಿ ಕೈಗೊಂಡಿರುವ ಸುರಕ್ಷಾ ಕ್ರಮಗಳು; ಈ ಸುರಕ್ಷಾ ಕ್ರಮಗಳು ರಾಷ್ಟ್ರೀಯ ಸುರಕ್ಷಾ ನಿಯಮಗಳಿಗೆ ಅನುಸಾರವಾಗಿದೆಯೇ; (ಸಂಪೂರ್ಣ ವಿವರ ನೀಡುವುದು). | ಗಣಿ ಉದ್ಯಮಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರ ಹಿತದೃಷ್ಟಿಯಿಂದ ಸುರಕ್ಷಾ ಕ್ರಮಗಳು ಮತ್ತು ಒದಗಿಸಬೇಕಾದ ಸೌಲಭ್ಯಗಳು ಭಾರತ ಸರ್ಕಾರದ MINISTRY OF LABOUR AND EMPLOYMENT/DIRECTORATE GENERAL OF MINES SAFETY ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತದೆ.<br>The Mines Act, 1957ರ ಅಧ್ಯಾಯ – 5ರಡಿ ಕಲಂ 19 – ಕುಡಿಯುವ ನೀರಿನ ಸೌಲಭ್ಯ<br>ಕಲಂ 20 – ಸಂರಕ್ಷಣೆ<br>ಕಲಂ 21 - ವೈದ್ಯಕೀಯ ಉಪಕರಣ<br>ಕಲಂ 22 – ಸುರಕ್ಷತೆ<br>ಕಲಂ 22A – ನಿರ್ಬಂಧಗಳು<br>ಒದಗಿಸುವ ಕುರಿತು ಕಾಯ್ದೆಯನ್ನು ರೂಪಿಸಲಾಗಿದ್ದು, ಅದರನ್ವಯ ಕ್ರಮವಹಿಸಲಾಗುತ್ತಿದೆ. |
| ಆ) | ಗಣಿಗಾರಿಕೆಯಲ್ಲಿ ಉಪಯೋಗಿಸುತ್ತಿರುವ ಯಂತ್ರೋಪಕರಣಗಳು ಹಳೆಯದಾಗಿದ್ದು, ಹೊಸ ತಂತ್ರಜ್ಞಾನ, ತಂತ್ರಾಂಶಗಳನ್ನು ಬಳಸಿ ಹೊಸ ಯಂತ್ರೋಪಕರಣಗಳನ್ನು ಅಳವಡಿಸಲು ಸರ್ಕಾರದ ಕ್ರಮಗಳೇನು? (ಈ ಬಗ್ಗೆ ಸಂಪೂರ್ಣ ವಿವರ ನೀಡುವುದು). | **ಗಣಿ ಮತ್ತು ಭೂವಿಜ್ಞಾನ ಇಲಾಖೆ**<br>ಗಣಿಗಾರಿಕೆಯಲ್ಲಿ ಉತ್ಪಾದನೆ ಹೆಚ್ಚಿಸುವ ಸಲುವಾಗಿ ಲಭ್ಯವಿರುವ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಗುತ್ತಿಗೆದಾರರಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಗುತ್ತಿಗೆದಾರರು ಸ್ವಯಂ ಹಳೇ ಯಂತ್ರೋಪಕರಣಗಳನ್ನು ವಿಲೇ ಮಾಡಿ ಹೊಸ ಯಂತ್ರೋಪಕರಣಗಳನ್ನು ನಿಯೋಜಿಸಿಕೊಂಡು ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಲಾಭಾಂಶವನ್ನು ಹೆಚ್ಚಿಸಿಕೊಳ್ಳುವುದರತ್ತ ಗಮನ ನೀಡುತ್ತಿರುವುದು ಕಂಡು ಬರುತ್ತದೆ.<br>ಪರಿಸರದ ಮೇಲಾಗುವ ದುಷ್ಪರಿಣಾಮವನ್ನು ತಡೆಯಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಕಬ್ಬಿಣದ ಅದಿರಿನ ಸಾಗಾಣಿಕೆಯನ್ನು Conveyor Belt ಮೂಲಕ ಮಾಡುವ ಯೋಜನೆಯನ್ನು ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಅನುಷ್ಠಾನಗೊಳಿಸುವ ಕ್ರಮ ಕೈಗೊಂಡಿರುತ್ತಾರೆ.<br>**ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿ.**<br>ಶಿಲಾ ಗಣಿಗಳಲ್ಲಿ ಉತ್ಪಾದನಾ ಗುಣಮಟ್ಟ ಹೆಚ್ಚಿಸಲು ವೈಜ್ಞಾನಿಕ ಮತ್ತು ಇತ್ತೀಚಿನ ತಂತ್ರಜ್ಞಾನ ಅಳವಡಿಸಿಕೊಳ್ಳಲು ವೈರ್ ಸಾ ಮಿಷನ್, ಲೈನ್ ಡ್ರಿಲ್ಲರ್‌ಗಳನ್ನು ಬಳಕೆ ಮಾಡಲಾಗುತ್ತಿದೆ ಮತ್ತು ಸ್ಫೋಟಕಗಳ ಬಳಕೆಯನ್ನು ಕಡಿಮೆ ಮಾಡಲು ಕೆಮಿಕಲ್ ಪೌಡರ್ ಮತ್ತು Rock Breaker ಮತ್ತು ಹೆಚ್ಚಿನ ಸಾಮರ್ಥ್ಯದ ಎಕ್ಸಾವೇಟರ್ ಯಂತ್ರಗಳನ್ನು ಬಳಕೆ ಮಾಡಲಾಗುತ್ತದೆ. |

| | | |
|---|---|---|
| | | ಕಬ್ಬಿಣದ ಅದಿರು ಗಣಿಗಳಲ್ಲಿ ರಸ್ತೆ ಮೂಲಕ ಅದಿರು ಸಾಗಾಣಿಕೆಯನ್ನು ತಪ್ಪಿಸಲು ಕನ್ವೇಯರ್ ಬೆಲ್ಟ್‌ಗಳನ್ನು ಅಳವಡಿಸಲು ಕ್ರಮವಹಿಸಲಾಗಿದೆ.<br><br>ಖನಿಜ ಮತ್ತು ಗ್ರಾನೈಟ್ ಉತ್ಪಾದನೆ, ಮಾರಾಟ ವಿವರಗಳು ಮತ್ತು ಪರವಾನಿಗೆ ವಿತರಣೆಯನ್ನು ಗಣಿ ಮತ್ತು ಭೂವಿಜ್ಞಾನ ಇಲಾಖೆಯು ಸಿದ್ಧಪಡಿಸಿರುವ ಐ.ಎಲ್.ಎಂ.ಎಸ್ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ.<br><br>**<u>ಹಟ್ಟಿ ಚಿನ್ನದ ಗಣಿ ನಿಗಮ ನಿಯಮಿತ</u>**<br><br>ಹಟ್ಟಿ ಚಿನ್ನದ ಗಣಿಯಲ್ಲಿ ಈ ಹಿಂದೆ ಸಣ್ಣ ಪುಟ್ಟ ಯಂತ್ರಗಳನ್ನು ಬಳಸಿ ಗಣಿಗಾರಿಕೆ ನಡೆಸಲಾಗುತಿತ್ತು, 1992 ವರ್ಷದಿಂದ ಮೊದಲ ಹಂತದಲ್ಲಿ ಗಣಿ ಆಧುನಿಕರಣಗೊಳಿಸಿ, ಮಾನವ ಶಕ್ತಿಯಿಂದ ನೇರವಾಗಿ ಕೆಲಸ ನಿರ್ವಹಿಸುವುದನ್ನು ಕಡಿಮೆ ಮಾಡಿ, ಹೊಸ ಯಂತ್ರೋಪಕರಣಗಳಾದ ಲೋಕೋಮೊಟಿವ್, ಅದಿರು ತುಂಬುವ ಲೋಡ್‌ರ್ಸ್, ಡಿಜೆಲ್ ಮತ್ತು ವಿದ್ಯುತ್ ಚಾಲಿತ ಎಲ್.ಎಚ್.ಡಿ.ಗಳು ಮತ್ತು ಅದಿರಿನ ಬಂಡೆಗಳನ್ನು ಒಡೆಯಲು ರಾಕ್ ಬ್ರೇಕ್‌ರ್ ಬಳಸಿ ಯಂತ್ರೋಪರಣಗೊಳಿಸಲಾಯಿತು ಹೊಸ ತಂತ್ರಜ್ಞಾನ ಎಲ್.ಡಿ.ಬಿ.ಎಚ್. ಸ್ಟೋಪಿಂಗ ಪದ್ಧತಿ ಬಳಸಿ ಹೆಚ್ಚಿನ ಪ್ರಮಾಣದ ಅದಿರು ಉತ್ಪಾದಿಸಲಾಯಿತು. ಈ ಎಲ್ಲ ಹೊಸ ತಂತ್ರಜ್ಞಾನವನ್ನು ಅನುಸರಿಸಿ ಪ್ರತಿದಿನ 2000 ಮೆಟ್ರಿಕ್ ಟನ್ ಅದಿರು ಉತ್ಪಾದಿಸುವ ಸಾಮರ್ಥ್ಯ ಹೊಂದಿರುತ್ತದೆ.<br><br>ಮುಂದಿನ ದಿನಗಳಲ್ಲಿ ಮೂರನೆಯ ಹಂತದ ಗಣಿಗಾರಿಕೆಯಲ್ಲಿ ಇನ್ನಿತರ ಹೊಸ ತಂತ್ರಜ್ಞಾನವನ್ನು ಬಳಸಿ ಅತೀ ಹೆಚ್ಚಿನ ಸಾಮರ್ಥ್ಯದ ಯಂತ್ರೋಪಕರಗಳಾದ ಎಲ್.ಪಿ.ಡಿ ಟಿ. (Low Profile Dum Truck) ಭೂ ಕೆಳಮ್ಮೆ 2700 ಲೆವಲ್ ನಲ್ಲಿ ಕ್ರಶರ್ ಸ್ಥಾಪಿಸಿ ಎಲ್ಲಾ ಮೇಲಿನ ಲೇವಲಿನ ಅದಿರನ್ನು 2800 ಲೆವಲೆಗೆ ಸಾಗಿಸಿ ಅಲ್ಲಿಂದ ಬೆಲ್ಟ ಕನ್ವೆಯರ್ ಮುಖಾಂತರ ಹೊಸ circular ಶ್ಯಾಫ್ಟಿಗೆ ಅದಿರು ಸಾಗಿಸಿ ಅಲ್ಲಿಂದ ಮೇಲೆತ್ತಿ ಶೇಖರಣೆಗೆ ಕಳುಹಿಸಿ, ಪ್ರತಿದಿನ ಪ್ರಸ್ತುತವಾಗಿ ಉತ್ಪಾದಿಸುವ 2000 ಮೆಟ್ರಿಕ್ ಟನ್‌ಗಳ ಚಿನ್ನದ ಅದಿರು ಸಾಮರ್ಥ್ಯದಿಂದ 3000 ಮೆಟ್ರಿಕ್ ಟನ್ ಚಿನ್ನದ ಅದಿರು ಉತ್ಪಾದನೆಯನ್ನು ಮಾಡುವ ಉದ್ದೇಶವನ್ನು ಹೊಂದಿರುತ್ತದೆ.<br><br>ಈ ಎಲ್ಲಾ ಆಧುನಿಕರಣ ಕೆಲಸ ಕಾರ್ಯಗಳಿಗೆ ಕಂಪನಿಯ ನಿರ್ದೇಶಕ ಮಂಡಳಿ / ಸರಕಾರದ ಅನುಮೋದನೆ ದೊರಕಿರುತ್ತದೆ. |

**ಸಂಖ್ಯೆ: ಸಿಐ 85 ಸಿಎಂಸಿ 2020**

**(ಸಿ.ಸಿ. ಪಾಟೀಲ್)**
ಗಣಿ ಮತ್ತು ಭೂವಿಜ್ಞಾನ ಸಚಿವರು

**ಸಿ.ಸಿ. ಪಾಟೀಲ**
**ಗಣಿ ಮತ್ತು ಭೂವಿಜ್ಞಾನ ಸಚಿವರು**